

ಒಮ್ಮೆ ತನ್ನ ಬಂಡೆನೆಲೆಯೊಂದರಲ್ಲಿ ಕಲ್ಲುಕುಟ್ಟಿಗನೊಬ್ಬ ಚಪ್ಪಡಿಯನ್ನು ಕತ್ತರಿಸುತ್ತಿದ್ದಾಗ, "ತಲೆ ಬಾಗಿ ನಮಸ್ಕರಿಸಿ, ತಲೆ ಬಾಗಿ ನಮಸ್ಕರಿಸಿ," ಎಂಬ ರಾಜದೂತರ ಕೂಗನ್ನು ಆಲಿಸಿದನು.



ಅನಂತರ ಬಿಳಿಯ ಆನೆಯೊಂದು ಕಾಣಿಸಿಕೊಂಡಿತು. ಅದರ ಬೆನ್ನಮೇಲೆ ಬಲಿಷ್ಠ ರಾಜನು ಆಸನಾರೂಢ ನಾಗಿದ್ದನು. ಕಲ್ಲುಕುಟ್ಟಿಗ ಮಂಡಿಯೂರಿ ನಮಸ್ಕರಿಸಿ "ರಾಜ ನನ್ನನ್ನು ನೋಡಲಾರನಲ್ಲ! ಅಂದರೆ ನಾನು ಆನೆಗೆ ನಮಸ್ಕರಿಸುತ್ತಿದ್ದೇನೆಂದಾಯಿತು," ಅಂತ ತನ್ನ ಮನಸ್ಸಿನಲ್ಲಿಯೇ ಯೋಚಿಸಿದನು.



"ಅಯ್ಯೋ ! ನಾನೆಂಥ ದರಿದ್ರ, ಕೇವಲ ಆನೆಗೂ ಎಂತಹ ಉತ್ತಮ ಜೀವನವಿದೆ. ನಾನು ಆನೆಯಾದರೂ ಆಗಬಾರದಿತ್ತೆ ?" ಎಂದೆಣಿಸಿದನು. ತಕ್ಷಣ ಕಲ್ಲುಕುಟ್ಟಿಗನು ಆನೆರೂಪ ತಾಳಿದನು. ಅವನು ಠೀವಿಯಿಂದ ಹೆಜ್ಜೆಯಿಡತೊಡಗಿದನು.



ಆಗ ರಾಜನು ಆನೆಯ ರೂಪದಲ್ಲಿದ್ದ ಕಲ್ಲುಕುಟ್ಟಿಗನ ಮೇಲೆ ತಾನು ಕುಡಿಯುತ್ತಿದ್ದ ಬಿಸಿ ಚಹಾ ಚೆಲ್ಲಿದನು. "ಅಲ್ಲಾ ! ನಾನೇ ರಾಜನಾಗಿದ್ದರೆ...." ಎಂದು ಕಲ್ಲುಕುಟ್ಟಿಗ ಬಯಸಿದನು.



ಅದೇ ಕ್ಷಣ ಅವನು ಬಿಳಿಯಾನೆಯ ಮೇಲೆ ಸವಾರಿ ಮಾಡುತ್ತಿದ್ದ ರಾಜನಾದನು. ರಾಜನ ದರ್ಪ, ಅಧಿಕಾರ ಹಾಗೂ ಚಹ ಈಗ ಅವನವಾದುವು.



ಸೂರ್ಯನಾದರೋ ರಾಜನ ಕಣ್ಣನ್ನೇ ಕುಕ್ಕುತ್ತಿದ್ದನು. ಬಿಸಿಲ ಝಳ ಹೆಚ್ಚಾಯಿತು. ರಾಜನಾಗಿದ್ದ ಕಲ್ಲು ಕುಟ್ಟಿಗನು, "ಸೂರ್ಯ ನನಗಿಂತ ಶಕ್ತಿವಂತ! ನನಗೆ ಸೂರ್ಯನಾಗಬೇಕೆಂಬ ಆಸೆ ಇದೆ!"ಎಂದು ಯೋಚಿಸತೊಡಗಿದನು.



ಆಗ ಅವನು ಸೂರ್ಯನಾಗಿ ಮಾರ್ಪಟ್ಟು ಗಗನಕ್ಕೇರಿದನು. ಭೂಮಿಯನ್ನು ತನ್ನ ಕಿರಣಗಳಿಂದ ಸುಡಲಾರಂಭಿಸಿದನು. ಭೂಮಿ ಕಾದು ಬಿಸಿಯಾಗತೊಡಗಿತು.



ಆವಿಯೂ ಏಳತೊಡಗಿತು. ಕ್ರಮೇಣ ಮೋಡ ವೆದ್ದು ಸೂರ್ಯನನ್ನು ಮರೆಮಾಡಿತು. ಆಗ ಸೂರ್ಯನಾಗಿದ್ದ ಕಲ್ಲುಕುಟ್ಟಿಗನು, "ನಾನು ಮೋಡ ವಾದರೂ ಆಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು !" ಎಂದು ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದನು.



ಆ ಕ್ಷಣವೇ ಅವನು ಮೋಡವಾಗಿ ಆಕಾಶವನ್ನೇ ಆವರಿಸಿದನು. ಆಗ ಇದ್ದಕ್ಕಿದ್ದಹಾಗೆಯೇ ಗಾಳಿ ಮೋಡ ವನ್ನು ಅಲುಗಾಡಿಸಿತು. ಮೋಡರೂಪದಲ್ಲಿದ್ದ ಕಲ್ಲು ಕುಟ್ಟಿಗನು, "ನಾನು ಗಾಳಿಯಾದರೂ ಆಗಬಾರದೆ," ಎಂದನು.



ಆ ನಿಮಿಷವೇ ಅವನು ಗಾಳಿರೂಪ ಪಡೆದನು. ಗಾಳಿ ರಭಸವಾಗಿ ಬೀಸಿ ಮನೆಗಳ ಚಾವಣಿ ಹಾಗೂ ಜನರ ಟೊಪ್ಪಿಗೆಗಳನ್ನು ತೂರಿ ಬಿಸಾಡಿತು.



ಆದರೆ ಗಾಳಿರೂಪದಲ್ಲಿದ್ದ ಕಲ್ಲುಕುಟ್ಟಿಗನು ಬಂಡೆಯೊಂದನ್ನು ಎದುರಿಸಲಾರದೆ ಚೂರು ಚೂರಾದನು. ಆಗ ಕಲ್ಲುಕುಟ್ಟಿಗನು "ನಾನು ಕಲ್ಲಾಗಬಾರದೇಕೆ?" ಎಂದೆಣಿಸಿದನು.



ತಕ್ಷಣ ಅವನು ಬಂಡೆಯಾಗಿ ಮಾರ್ಪಾಡಾದನು. ಬಂಡೆಯು ಮೋಡದಲ್ಲಿ ಎದ್ದು ಕಾಣುತ್ತಿತ್ತು. ಜನರು ಬಂಡೆಯ ಬುಡದಲ್ಲಿ ಪುಟ್ಟಪುಟ್ಟದಾಗಿ ಕಣ್ಣಿಗೇ ಬೀಳ ಲಾರದಾಗಿದ್ದರು.



ತನ್ನ ಕೈಯಲ್ಲಿ ಭಾರವಾದ ಸುತ್ತಿಗೆಯನ್ನು ಹಿಡಿದಿದ್ದ ಮತ್ತೊಬ್ಬ ಕಲ್ಲುಕುಟ್ಟಿಗನನ್ನು ಬಂಡೆಯ ರೂಪದಲ್ಲಿದ್ದ ಅವನು ನೋಡಲಿಲ್ಲ. ಸುತ್ತಿಗೆಧಾರಿ ಬಂಡೆಯ ಮೇಲೆ ಅದನ್ನು ಪ್ರಯೋಗಿಸಿದ.



“ಅಯ್ಯಯ್ಯೋ ! ಎಲ್ಲರಿಗಿಂತ ಮನುಷ್ಯನೇ ಅತ್ಯಂತ ಬಲಶಾಲಿ,” ಎಂದು ಬಂಡೆಯ ರೂಪದಲ್ಲಿದ್ದ ಕಲ್ಲು ಕುಟ್ಟಿಗನು ರೋಧಿಸಿದನು. “ನಾನು ಮನುಷ್ಯನಾಗಬಾರದೆ,” ಎಂದು ಅವನು ಯೋಚಿಸತೊಡಗಿದನು. ಆಗ ಅವನು ಎಂದಿನಂತೆ ತನ್ನ ಬಂಡೆನೆಲೆಯಲ್ಲಿ ಚಪ್ಪಡಿ ಕತ್ತರಿಸುತ್ತಿದ್ದ ಕಲ್ಲುಕುಟ್ಟಿಗನಾದನು.



ರಾಜದೂತರು "ಮಂಡಿಯೂರಿ ನಮಸ್ಕರಿಸಿ," ಎಂದು ಕೂಗಿದಾಗ ಕಲ್ಲುಕುಟ್ಟಿಗ "ನಾನು ನಮಸ್ಕರಿಸುವುದಿಲ್ಲ," ಎಂದು ತನಗೆ ತಾನೇ ಹೇಳಿಕೊಂಡನು.



ಅವನು ತನ್ನ ಸ್ಥಳದಿಂದ ಮೇಲೇಳಲಿಲ್ಲ. ಅವನನ್ನು ಮಂಡಿಯೂರಿ ನಮಸ್ಕರಿಸುವಂತೆ ಮಾಡಲು ಯಾರಿಂದಲೂ ಸಾಧ್ಯವಾಗಲಿಲ್ಲ. ಏಕೆಂದರೆ ಇತರರ ದರ್ಪ ಮಾನವನನ್ನು ಶರಣಾಗತನಾಗುವಂತೆ ಮಾಡ ಲಾರದು. ತನ್ನ ವಿಧೇಯತೆ ಇದನ್ನು ಮಾಡಬಲ್ಲದು.